# ನಮ್ಮ ಮುಂದಿನ ಪ್ರಕಟಣೆ

!!! !!! !!!



ಆಕರ್ಷಕ ಮುಖಚಿತ್ರ ಮತ್ತು ಹಿರಿಯ
ಲೇಖಕರು ಎಂ. ಜೀವನ ಅವರ ಮುನ್ನುಡಿಯೊಂದಿಗೆ

[ ಅತಿ ಶೀಘ್ರದಲ್ಲಿಯೇ ಹೊರಬರಲಿವೆ ]

೧) ಮಿಸ್ ನಳಿನಿ (ಸಾಮಾಜಿಕ)
೨) ಮಧುಮೂರ್ತಿ—ಪುನರ್ಮಿಲನ (ಕಥಾ ಸಂಕಲನ)
೩) ಮರ್ಮಯೋಗಿ (ಚರಿತ್ರಾತ್ಮಕ ಕಾದಂಬರಿ)

——ಲೇಖಕರು:
**S. ನಾರಾಯಣಸ್ವಾಮಿ**
ತಗರಪುರ.

ಪ್ರಕಾಶಕರು:—
**ಜೆ. ಟಿ. ಬಾಕಳೆ**
ಶ್ರೀ ಜಗದಂಬಾ ಪ್ರಕಾಶನ, ಹುಬ್ಬಳ್ಳಿ.

# ಹಂತಿಯ ಪದಗಳು

( ಜಾನಪದ ಗೀತೆ )



§†§

ಸಂಗ್ರಾಹಕರು:—

ಬಿ. ಜೆ. ಜಾನಕಿ

—*—

೧೯೫೯

ಬೆಲೆ: ೦-೬-೦ ೩೭ ನ-ಪೈ.

ಮುದ್ರಕರು:—

**ಆರ್. ಜೆ. ಬಾಕಳೆ**

ಶ್ರೀ ರೇಣುಕಾ ಪ್ರಿಂಟಿಂಗಪ್ರೆಸ್, ಡಾ. ಮುಕರ್ಜಿ ರೋಡ, ಹುಬ್ಬಳ್ಳಿ.

ಮುಖಚಿತ್ರದ ರಚನೆ:—

**ಜಗದಂಬಾ ಪ್ರಕಾಶನದ ಕಲಾವಿದರಿಂದ**

★



ಮೊದಲ ಮುದ್ರಣ

**ಅಗಷ್ಟ ೧೯೫೯**







ಪ್ರಕಾಶಕರು:—

**ಜಿ. ಟಿ. ಬಾಕಳೆ**

ಶ್ರೀ ಜಗದಂಬಾ ಪ್ರಕಾಶನ, ೧೪೪೭೩ ಗಂಜೀ ಓಣಿ, ಹುಬ್ಬಳ್ಳಿ.

# ಹಂತಿಯ ಪದಗಳು

ಕಾಡಾನೆ ಕಾಡಯ್ಯ, ಬ್ಯಾಡರ ಬೀಡಯ್ಯ ।
ನಾಡಾಗಿ ಮಾಡಿ ಮಲ್ಲಣ್ಣ ।
ಕಿತ್ತೂರ ಗೊಡೀಗೆ ಗುಡಿಯನೇರಿಸಿದೊ ॥೧॥
ಬಣಜೀಗ ಮಲ್ಲಣ್ಣ, ಜನದಾಗ ಕಣಿಯಾದ ।
ಕುಣಿಸಿ ಲಕ್ಕ್ಯಸಮಿನಾಡಾಗ ।
ಕಿತ್ತೂರ ಕಣಜಾತು ಮುತ್ತು ಮಾಣಿಕದ ॥೨॥
ಕಿತ್ತೂರ ಕಡೆಯರಸುಮುತ್ತು ಮಾಣಿಕ ।
ದೊಡೆಯ ದತ್ತಕಽ ಮಗಽ ಮಲಸರ್ಜ್ಜ ।
ಸಮಸೂರ ಸತ್ತ ಕಿತ್ತೂರ ಮುಟ್ಟ್ಯದಕೊ ॥೩॥
ಹಾಲಗುಂಬಳಿ ಬಳ್ಳಿ, ಹಾದಿಗೆ ಹಬ್ಬ್ಯಾದ ।
ಹಾರೂರಿಗೆ ಬಂತೊ ದೌವಲತ್ತೊ ।
ಕಿತ್ತೂರ ಮಲಸರ್ಜ ಬಂತೊದವನಪೇಶೋ ॥೪॥
ಸೊಗಲಂಬು ಊರಿಲ್ಲ, ಸಮುದರ್ಕ ನೆಲೆಯಿಲ್ಲ ।
ಜ್ಯಾಡ ಮುತ್ತಿಗೆ ಬೆಲೆಯಿಲ್ಲ ।
ಕಿತ್ತೂರ ಮಲಸರ್ಜನಂಥ ದೊರೆಯಿಲ್ಲ ॥೫॥
ರಂಗಕಿತ್ತೂರ ಮಾಲ, ಹೊಕ್ಕ ನೋಡುಣು ಬಾರ ।
ಮಾಲ ಮಾಲೆಲ್ಲ ಕನ್ನಡಿ ।
ಮಲಸರ್ಜ ಮಾಲ ಕಟ್ಟೀನೆ ಇರಲಿಲ್ಲೊ ॥೬॥
ಕಿತ್ತೂರ ನೀಮಾಲ, ಮತ್ತ್ಯಾರ ಕಟ್ಟಿಸ್ಯಾರ ।
ಮಕ್ಕಳತಂದಿ ಮಲ್ಲಸರ್ಜ ।
ನಿಮ್ಮ್ಯಾಲ ಹೊಕ್ಕ ನೋಡ್ಯಾರ ಹೊಲಿಯಾರ ॥೭॥

ಕಿತ್ತೂರ ಮಲಸರ್ಜ ಕಿಚ್ಚಕಂಜವನಲ್ಲ ದತ್ತ।
ಗೇಡೊಬ್ಬ ಮಗ ಹುಟ್ಟಿ।
ಕಳಿದಾನೊ ಹೆತ್ತ ತಲಗಂಡವತನಾವ ॥೮॥
ಕಿತ್ತೂರ ಮಲಸಜ್ಜ ಯಾರಿಗಂಜವನಲ್ಲ।
ಪಚ್ಛೇದ ಕಣ್ಣ ತಿರವೂತ।
ಮಲಸರ್ಜ ತಕ್ಕೊಂಡನೆಂದ ಹಂದಲಿಕ್ಕಿಯ ॥೯॥
ಶಿವಲಿಂಗ ರುದ್ರಸಿಗೆ ಸಾವು ಕೂಡಲೇ ಬಂತ।
ಜೀವ ಕಸವಿಸಿ ಚನ್ನವ್ವಗೂ।
ಹಾರೂರ ಹಾವಾಗಿ ಮನೆಗೆ ವಿಷಬಿಟ್ರೊ ॥೧೦॥
ಮಹಬೇರಿಬ್ಬರು, ಸಿಡಿದು ಕಡದಾಡಿ ಒಡಕ್ಹುಟ್ಟಿ।
ತನದೊಡ್ಡೆ ದತ್ತಕ ತಗೊಂಡು।
ಚೆನ್ನಮ್ಮ ಒಡತ್ಯಾಗಿ ನಾಡ ಆಳ್ಯಾಳೊ ॥೧೧॥
ಹಾಲಿನಂಥ ಕಿತ್ತೂರ್ಗೆ ಹನ್ನೆರಡು ಕೀಲಗಸಿ।
ಸುತ್ತ ಸುತ್ತೆಲ್ಲ ಕಿರಿಜಿಡ್ಡಿ।
ಈರಡನ ಕಿತ್ತೂರಿಗೆ ತಂದು ಇಳವ್ಯಾರೊ ॥೧೨॥
ಕಂದನ್ನೆ ಹಡಿಲಿಲ್ಲ, ಕೈಬೀಸಿ ನಡೆಲಿಲ್ಲ।
ಗಂಡನ ಪುಣ್ಯ ಉಣಲಿಲ್ಲ।
ಈರವ್ವ ರಂಡಿತನ ನಿನಗೆ ಮೂಲಾತೊ ॥೧೩॥
ಕನ್ನೂರ ಮಲ್ಲಿಗೆ, ತನ್ನಿ ಬ್ಲಾಗೆನ್ದತ್ತಲಿ ಚನ್ನ।
ಮನ ರಾಜ್ಯ ನುಂಗ್ಯಾಕೊ ಥಾಕರೆಗೆ।
ಗುನ್ನೆ ಮಾಡುದಕ ಪುಸಲಿಟ್ರೊ ॥೧೪॥
ಕಲ್ಲೂರ ಮಲ್ಲಿಗ, ಎಲ್ಲಾರ ಒದೆಯು।
ಅಗುಲ್ಲಾ ಗಂಟೇರ ಉಗಳ್ಸಲಿ ಥಾಕರೆಗೆ।
ಸಲ್ಲಾ ಕೊಟ್ಟ್ಯಾನೊ ಮುತ್ತಾತೊ ॥೧೫॥
ಧಾರ್ವಾಡ ವೆಂಕಾಟ, ಸಾದಾಕೆಳಲಿ ನೆರಕೊಯ್ದಂಕಾರ।
ಭಾರಿಗಳು ಕಿವಿಗೊಟ್ಟು।
ಕಿತ್ತೂರ ಚೂರು ಚೂರಾತೊ ಕದನಾತೊ ॥೧೬॥

ಕಿತ್ತೂರ ಚನ್ನಮ್ಮ ಕುತ್ತೂರ ಒಡತ್ಯಾಗಿ ।
ಕತ್ತಿ ಕವಚಗಳ ಉಡಪುಟ್ಟೊ ।
ಅಬ್ಬರದಿ ಬತ್ತಲ ಗುಜರಿಯ ಜಿಗಿದಾರೋ ||೧೭||
ಗಂಡನ್ನ ಕಳಕೊಂಡು, ಬೆಂಡಾದ ಚನ್ನಮ್ಮ ।
ಗಂಡಾಗಿ ರಣಕ ಇಳಿದಾಳೊ ।
ನಾಡನ್ನ ಪುಂಡ ಬಂಡಾಯ ಹಿಂಡಾಕೊ ||೧೮||
ಧಾರವಾಡದ ದಂಡು, ದಾರ್‍ಯಾಗ ಬರುತಿರಲು ।
ಏರಿಯ ಹತ್ತಿ ಸುರಿಸ್ಯಾನೊ ।
ಕಿತ್ತೂರ ವೀರರೊಗೆದಾರೊ ಗುಂಡಿರೊ ||೧೯||
ಕೆಂಪು ಮೋರೆಯ ದಂಡು ಚಿಂಪಾಗಿ ಸಿಡದಿ ।
ರಂಪರಂಡೆದುವೆಂದು ಓಡೀತೊ ।
ಅಮಟೂರ ಬಾಳು ಗುಂಡಿಟ್ಟೊ ಥಾಕರೆಗೂ ||೨೦||
ಮುಚ್ಚಿನ ಕಾಳಗಕ್ತ ಮೆಚ್ಚ್ಯಾಳೊ ಚನ್ನಮ್ಮ ।
ಉಚ್ಚಿ ಬೆಳ್ಳಿಗಳ ಕೊಡತಾಳೊ ।
ಬಂಟರಿಗೆ ಹೆಚ್ಚಿನ ರೋಜ ಬರೆಸ್ಯಾಳೊ । ||೨೧||
ಬೆಳಗಾಂವಿ ಚಿಪ್ಲಿನ್ನ, ಒಳಹಾದಿಲಿ ದಂಡೆತ್ತಿ ।
ಬೆಳಗಾಗಿ ದಂಡು ಬೀಡಿಟ್ಟೊ ।
ಕಿತ್ತೂರ ತಳಮಳ ನೋಡೊ ಪಣದಾಗೊ ||೨೨||
ಹೊನ್ನು ಹಣಗಳ ನೀವೆ, ಮುನ್ನೂಣಿ ನಿನಗೀವೆ ।
ಬೇಡಿದ್ದ ನೀವೆ ಗೋವಿಂದ ।
ಮನಸಿಟ್ಟು ಮದ್ದಿನಗೆ ಎಣ್ಣಿ ನೀ ಬೆರಿಸೊ ||೨೩||
ಲದ್ದೀಯ ಗೋವಿಂದ ಕುದ್ದಲ ಗೇಡ್ಯಾರೊವ ।
ಮದ್ದಿನಗೆ ಲದ್ದಿ ಬೆರಿಸ್ಯಾನೊ ।
ನಸಿಬಾವೂ ಬಿದ್ದು ಕಿತ್ತೂರ ಹಾಳಾತೊ ||೨೪||
ಕನ್ನೂರ ಕಲ್ಲೂರ, ಮಲ್ಲರದು ಕಪಿತೊರಿದರಾಗಿ ।
ಕೊಡಿಸಿದ ಹುಸಿಮದ್ದೊ ।
ಕಿತ್ತೂರ ನಸಿಬಹಾರ್‍ಯಾವೊ ಹುಸಿಗುಂಡೊ ||೨೫||

# ಹಂತಿಯ ಪದಗಳು

ಕಿತ್ತೂರ ಕಿಲ್ಲೇಕ ಉತ್ತಿಕರ್ರ್ಯಾರಿಲ್ಲ ಉಕ್ಕಿನ ।
ಗುಂಡು ಬಿಗಿವಾಗ ।
ಚನ್ನಮ್ಮ ದಕ್ಕ್ಯಾಗಿ ಬಾಯ ಬಿಡತಾಳ ||೨೬||
ಕಿತ್ತೂರ ಕಿಲ್ಲೇಕ್ತ ಏನೇನ ಮಸಲತ್ತ ಉಕ್ಕಿsನ ।
ಗುಂಡ ಉರಿಬಾಣ ।
ಚನ್ನಮ್ಮ ಅರಮನಿಗೆ ಬಾಣ ಬಿಡತಾರೊ ||೨೭||
ಜಮುಖಂಡಿ ದೇಸಾಯಿ, ಯಮಕೀಲೊಡ್ಡsದ ।
ಸಮಯಕ ಚೆಪ್ಲಿನ್ನ ದಂಡ್ಡsಗೊ ।
ಕಿತ್ತೂರ ಸಮನಾಗ್ಯೆಸೀರಿ ಹೊತ್ತೊಯ್ದೊ ||೨೮||
ಎಂಥಾದ ಕಿತ್ತೂರ, ಚಿಂತ್ಯಾಗ ಬೆಳಗಾತ ।
ಕೆಂಪು ಮೋತಿಯವರು ಒಂದೂಡಿ ।
ಚನ್ನವ್ವ ಚಿತ್ರದ ಮೂಲ ಮುರಿದಾರೊ ||೨೯||
ಕಿತ್ತೂರ ಕಿಲ್ಲೇಕ, ಹತ್ತು ಕಾಲ್ನಿಚ್ಚಣಕಿ ಕೊತ್ತ ।
ಕೊತ್ತಲಕಕ್ಕೆ ಪಂಜು ।
ಹಿಡಕೊಂಡು ಸುತ್ತ ಚನ್ನವ್ವ ಹುಡಿಕ್ಯಾರೊ ||೩೦||
ಕಿತ್ತೂರ ಕರಸೂರಿ ಮತ್ತೇನ ಹೇಳಲಿ ।
ಚಿತ್ತರದಗೊಂಬಿ ಅಳತಾವ ।
ಚನ್ನವಗ ಹಿಂದೆಮ್ಮಿ ಹಸವು ಎಳಿಗಾರ ||೩೧||
ಕೆರಳಿsದ ಕೇಸರಣಿ, ಕಿತ್ತೂರ ಬಿಡಗೊಟ್ಟು ।
ಬತ್ತಲ ಗುದರೀಯ ಜಿಗದೇರಿ ।
ಹೊಂಗಲದ ಗಡಿಯೊಗ್ಗೆಶೀಗೆ ಸೆರೆಯಾಗಿ ||೩೨||
ಕಿತ್ತೂರ ಶೆರೆಸೂರಿ ಮತ್ತೇನ ಹೇಳsಲಿ ।
ಎತ್ತೊಂಟಿ ಮ್ಯೊಗಸದಲ್ಹೇರಿ ।
ಹೊಡೆದಾಕೊ ಮತ್ತ ಧಾರ್ವಾಡ ಕಿಲ್ಲೇಕೊ ||೩೩||
ಅತ್ತೆ ಸೊಸ್ತೆರ ತಂದು, ಮತ್ತ ಹೊಂಗಲದಾಗ ।
ಸುತ್ತ ಕಾವಲಿಯೊ ಹಗಲಿರುಳೆ ಜನದಾಗ ।
ಎತ್ತ ನೋಡಿದರೊ ತಳಮಳೊ ||೩೪||

ಮುಕ್ಕಣ್ಣ ಗತಿಯಂದು, ಸಿಕ್ಕು ಸೆರೆಯಾಗಿದ್ದು |
ಬಿಕ್ಕಿ ಅಳತಾಳೊ ಈರವ್ವ ರಾಯಣ್ಣ |
ಅಕ್ಕ ನಿಮ್ಮಪ್ಪ ಈರಾಯೋ ||೩೫||
ಗೆದ್ದು ಕಿತ್ತೂರ ತಂದು ಉದ್ದ ಬೀಳಃದೆ ತಾಯಿ |
ಇದ್ದಮಾತಲ್ಲ ನಿಮ್ಮಾಣೆ |
ಇಲ್ಲದಿರಕ ಬಿದ್ದು ಹೋಗುವೆ ಕಣದಾಗೊ ||೩೬||
ಸೆಂಗೊಳ್ಳಿ ರಾಯಣ್ಣ, ಹಂಗ್ದರಿದ ದಳವಾಯಿ |
ದಂಗೆ ಎಬ್ಬಿಸಿದ ನಾಡಾಗೋ |
ಕಿತ್ತೂರ ಕಂಗೆಟ್ಟ ಜನರು ಕೂಡ್ಯಾರೊ | ||೩೭||
ಸುದ್ದಿ ಹಬ್ಬಿತು ಸುತ್ತ, ಎದ್ದು ಕೂಡಿತು |
ಮಂದಿಗದ್ದಲಕ ಅಂಜಿ ಸರಕಾರ |
ಈರವ್ನ ಕದ್ದಿಲ ಕೊಂದಾರೊ ವಿಷಕೊಟ್ಟು ||೩೮||
ಬೆಳ್ಳಿ ಹರಿವಾಣದಾಗ, ಬಿಳಿ ಮುತ್ತು ಸುರಿದ್ಹಾಂಗ |
ಚಂದ್ರ ಸಾಲಿಗೋಡಿ ಬರಿಯಾಲಿ ;
ಈರವ್ನ ಕೊಂದವರ ವಂಶ ಹುರಿಯಾಲಿ ||೩೯||
ಖುದಾನಪುರದಾಗ, ಹೋದಾನೊ ರಾಯಣ್ಣ |
ಭೇದಪವಿಡಲಲ್ಲಿ ಮನದಾಗ |
ಲಿಂಗೊಂಡ ವಾದಿ ರಾಯಣ್ಣ ಮೋಸಾಗಿ ||೪೦||
ನಂದಗಡೆ ಊರಾಗ ಮಂದ್ಯಾಗ ರಾಯಣ್ಣ |
ತಂದು ಶೂಲಕ ಹಾಕ್ಯಾರೊ |
ಕಿತ್ತೂರ ಗೊಂದಲ ಪೊರೆಗೆ ದುರುಮರಣೊ ||೪೧||
ಹೊಂಗಲದ ಮಟದಾಗ, ಲಿಂಗ ಪೂಜೆಯು ಮಾಡಿ |
ಭಂಗಾಗುದೆಂದು ಎದೆಗುಂದಿ |
ಚನ್ನವ್ವ ಉಂಗರ್ವಜ್ಜಿರ ನುಂಗ್ಯಾಳೊ ||೪೨||
ಹೆಸರೀಗೆ ನರಗುಂದ, ಮೊಸರೀಗೆ ಸೀಶಿಲ್ಲ |
ಕುಸುರದಸೆಂಬಿ ಬರಿಗೂಡ ಇಟಗೊಂಡು |
ವುಸೆರೆಂತೆ ಭಾವಿ ಇಳಿದಾರೊ ||೪೩||

# ಹಂತಿಯ ಪದಗಳು

ನರಗುಂದ ಕಾಳಪನ, ಮತಿಗುವರಿ ಸಾಯ್ಕಲಿ ।
ಚದರಂಗ ಮಾಲ ಮುಯ್ಕಲಿ।
ಸೊರಟೂರ ಸೆದರೀಗೆಸುದ್ದಿ ಹರಿಯ್ಕಲಿ ||೪೪||
ನರಗುಂದವೆಂಬೂದ, ಆರಗಿಣೆ ಪಟ್ಟಣ ।
ಕೆರೆಕಡಿಸಿ ನೀರ ಕುಡಿಲಿಲ್ಲ ।
ಬಾಬಣ್ಣಾ ತಿರುಗಿ ನರಗುಂದ ಹೊಗಲಿಲ್ಲ ||೪೫||
ಕೆಂಪು ಮಾರಿಯ ದಂಡು, ಗುಂಪಾಗಿ ಮುತ್ತ್ಯಾರೊ !
ಕಂಪೀಸಿ ಹೋತೊ ನರಗುಂದೊ ।
ಬಾಬಸಾಬ ಹಂಪಿ ಹೊಳಿ ಮುಂದ ತಡೆವ್ಯಾನೊ ||೪೬||
ಹೆಂಡ ಬಂಡದ ಕುದರ್ರಿಗೊಂಡೆಲಾಗು ಮನ್ಹಾಕಿ ।
ದಂಡು ಇಳದೀತೊ ನರಗುಂದೊ ।
ಬಾಬಾಸಾಬ ಗುಂಡಿಲಿಕ್ಕ್ಯಾನೊ ಗುಡಿಯಾಗೊ। ||೪೭||
ವಿದ್ಯಾತಾಂಡೆದ ಬಂಟ, ಕಣ್ಣಿಟ್ಟ ಸಿರಕೊಯ್ದ ।
ಮಣ್ಣ ಪಾಲಾದ ಮಣಸನ್ನ ।
ನರಗುಂದ ಅಣ್ಣ ಕೂಗ್ಯಾನೊ ಕಾಳಗೊ ||೪೮||
ಮುಂಡರಗಿ ಭೀಮಣ್ಣ ಬಂಡಾಯ ಎಬ್ಬಿಸಿದ ।
ದಂಡ ಕೂಡ್ಯಾನೊನರಗುಂದ ।
ಬಾಬಣ್ಣ ಕೆಂಡಕಾರ್ಯಾನೊ ಕುಂಪಣಿಗೊ ||೪೯||
ಮಾಲಕ ಮಸಾಹೇಬ ಕೋಳಿ ಮೆಣಸಿನ।
ಸಾವಗಾಳಿ ಬಂದ್ಹಾಂಗ ಮುತ್ತ್ಯಾನೊ ।
ನರಗುಂದ ತಾಳಬಸ್ಯಾತೊ ಚರಾದಾಗೊ ||೫೦||
ಬಾಪು ಘಾತರ ಸೆಂಚು, ಘಾತ ನರಗುಂದಾತೊ ।
ಹೋತೊ ಹಾಳಾಗಿ ನಿವ್ದೆತಗಿ ।
ನರಗುಂದ ಖ್ಯಾತಿಜನದಾಗ ಕಡೆತನಕ ||೫೧||
ಹಾರೂರ ಹಾವಾಗಿ ಕೋರ್ಯಾರೊ ಒಳಸಂಚು ।
ಗಾರಗಾರಾತೊನರಗುಂದ ।
ಬಾಬಾಸಾಬ ಕಾರಮಳಿಯೊಗ ಮನಿಬಿಟ್ಟ । ||೫೨||

ಕಾಡೆಲ್ಲ ಕತ್ತರಿಸಿ, ನಾಡೆಲ್ಲ ತತ್ತರಿಸಿ ಬಾಡೂಗಳ್ಳರು ।
ಹಾರೂರ ತಾನಂಬಿ ।
ಕಾಡಿಗೀಡಾದ ಬಾಬಣ್ಣ ||೫೩||
ಮಡದಿ ಮಕ್ಕಳ ಬಿಟ್ಟ ಹಡೆದ ತಾಯಿಯ ।
ಬಿಟ್ಟ ಕಡೆಗಾತ ಬಿಟ್ಟ ಸ್ವಾಥಾಸೆ ।
ಬಾಬಾಸಾಬ ಕೇಡಿಗೆ ಬಿಟ್ಟ ನರಗುಂದ ||೫೪||
ದೇಶಽವ ಕಡೆಮಾಡಿ ಆಶೆಽಗೆ ಈಡಾಗಿ ಕಾಸು ।
ಕವಡಿಽಗೆ ಕಡೆಯಾಗಿ ।
ಹಾರೂರು ಹಾಸಿ ಬೆಂಕ್ಯಾಗ ಬೂದ್ಯಾಗಿ ||೫೫||
ನರಗುಂದ ಅರಸನಿಗೆ ವನವಾಸ ಬಂದೀತೊ ।
ತಿರಿಗ್ಯಾನೊ ಕಾಡಪಾಲಾಗಿ ಸೂಟಿರಗ ।
ತೊರಗ ಸೀಪ್ಯೊಗಕ್ಕೆ ಸಿಕ್ಕೊ ||೫೬||
ಮಾಳಿ ಮ್ಯಾಗಿನ ಹುಲ್ಲಿ, ಗಾಳಿಗ್ಹಾರಿದರೇನು ।
ಗಾಲಮೇಲಾತೊ ನರಗುಂದೊ ।
ಬಾಬಾಸಾಬಗಾಳೀಗಿ ಬಾಯಬಿಡತಾನೊ ||೫೭||
ಹೊಲಸಾಮಿಯು ಕೊಟ್ಟ, ಕೋಲಮಿಂಚಿನ ಸಾಪ ।
ಗಾಲಮೇಲಾತೊ ನರಗುಂದೊ !
ಮೂರು ವರುಷ ಕೂಲಿ ಕುಂಬಳಿಗೆ ಎರವಾತೊ ||೫೮||
ಸಂಗಪ್ಪ ನಿನ್ನ ತೇರು । ಶೃಂಗಾರ ನಾಗ್ಯಾವ ।
ಬಂಗಾರ್ದ ಕಳಸಽ ಬರತಾವೊ । ಬಾಗಲ್ಕೋಟಿ. ||೫೯||
ಸಂಗಮದಾರೀಲೆ ಸಾಲ ಟೆಂಗಿನಮರ ।
ಕೊಂಗಿ ಕೊಂಗಿಗೆ ಎಳೆಗಾಯಿ । ನಮ ಬಸವ ।
ಬಿಲ್ಲೀಲೆ ಒಗೆದರ ಬಿಳಿಗಾಯಿ ||೬೦||
ಬಸವ ಬಂಡಿಯನೇರಿ ಶಿವನು ನಂದಿಯನೇರಿ ।
ಪಾರ್ವತಾದೇವಿ ರಥ ಏರಿ । ಬರುವಾಗ ।
ಒಡ್ಡಿದ ಮೋಡ ಬಯಲಾಗಿ ||೬೧||

ತಂಗಿಯ ಮನಿಮುಂದ ಗಂಗಾಳ ಮಾಟದ ಭಾವಿ ।
ಟೊಂಗಿನ ಹಗ್ಗ ಬಲಗೈಯ್ಯೋ । ಹಿಡಕೊಂಡು ।
ತಾಯನ್ನ ಸೇಧಾಳ ತಿಳಿಸೀರ ॥೬೨॥

ಬೆಳ್ಳನ್ನ ಎರಡೆತ್ತು ಎಲ್ಲಿಗಿ ಹೋಗಿದ್ದ ।
ಎಲ್ಲರ ಕಣ್ಣು ನಿನಮ್ಯಾಲು । ನಿಮ್ಮವ್ವ ।
ನೆಲ್ಲಕ್ಕಿ ನೆದರ ತಗದಾರೂ ॥ ॥೬೩॥

ಬೆಳ್ಳನ್ನ ಎರಡೆತ್ತ ಹುನಗುಂದಳ್ಳಕ್ಹೋಗಿ ।
ಬೆಳ್ಳಕ್ಕಿಕಂಡ ಬೆದರ್ಯಾವ । ನವು ಬಸವ ।
ಸೂರ್ಯನ ಕಂಡ ಸುರಿಗ್ಯಾವ ॥ ॥೬೪॥

ಹುಗ್ಗಿ ಹೋಳಿಗಿ ಉಂಡು ಬಗ್ಗಿ ಕೋರಿಗಿ ಬಿಗಿದು ।
ಕ್ವಾರಿ ಮೀಶೆಯವನ ಕುರಬನ । ಕೂರಿಗಿ ।
ಊರಿಗಿ ಮೊದಲ ಸಾಗ್ಯಾವ ॥ ॥೬೫॥

ಶ್ಯಾಸ್ವಿ ಬಂಣದ ಹೋರಿ ಸೋಸೀ ನಾ ತಂದೆ।
ಸೋರಿ ಉಡವ್ವ ಭೂಮಿ ತಾಯಿ। ಹಾ ॥೬೬॥

ಹರಗಿದ ಹೊಲದಾಗ ಹವಳ ಸೂರಾಡಿದಂತೆ ।
ಬಿತ್ತೀದ ಹೊಲದಾಗ ಮುತ್ತ ಸೂರ್ಯಾಡಿದಂತೆ ।
ಎತ್ತವ್ವ ತಾಯಿ ಬರಿಗಾಯಿ ॥ ॥೬೭॥

ಮುತ್ತಿನ ಮುಗುತಿ ನಕ್ಕರ ಸುಲಿಯದು ।
ಅಕ್ಕ ನೀನ್ಯಾರ ಮಗಳವ್ವ । ಕಿಲೂರ ।
ಗಚ್ಚಿನ ಗುಡಿಯ ದ್ಯಾಮವ್ವ ॥ ॥೬೮॥

ಹಂಡ ಬಂಡದ ಎತ್ತು ಬಂಡಿ ಸಾಗರದೆತ್ತು ।
ಸರಕಾರದೆತ್ತು ಶಿವರಾಯ । ಮಾರಿದರ ।
ಸೂಳಿ ನಿನ ಸಾಲ ಹರಿಲಿಲ್ಲ ॥ ॥೬೯॥

ಧಾರವಾಡದ ಹೆಣ್ಣ ಕಳುಹಲಿ ಹೋದೆ ।
ಜೇರೆ ಮಾಡಿದಾವ ಎಳಿಹುಣ್ಣ । ಯಮನೂರ ಪೀರ ।
ಪಾರ ಮಾಡಿದಾನೋ ಪರಿಹಾರ ॥ ॥೭೦॥

ಏರ ಬಾರದ ಗುಡ್ಡ ಏರ್ಯಾವ ನಮ್ಮೆತ್ತು |
ಬೋರಂಗಿ ಕಡಗ ಸರಿಗಂಟ್ಟಿ | ಕಟಿಗೊಂಡು |
ಏರಿ ಮೇದಾವು ಎಳೆಹುಲ್ಲ || ||೭೧||
ಕಕ್ಕೇರಿ ಜಾತರಿ ಒಂದೀನ ರಾತರಿ |
ಕಬ್ಬೇಣ ಗಣಿಕಿ ಪುಡಿಬೆಲ್ಲ | ಹೊತುಗೊಂಡು |
ತುಗ್ಗ್ಯಲಿ ಗಿಡಕ ನಡದಾಳ || ||೭೨||
ನೀರಿಗೋಗುವ ಜಾಣ ನಿಲ್ಲ ನಾ ಬರತೇನ |
ನಿನ್ನಾಣೆ ನಿನ್ನ ಕೊಡದಾಣೆ | ಆ ಬಾಲಿ |
ಹೊಳಿಯಾಸಿ ನೀರ ಹೊಳಿಯಾಣೆ || ||೭೩||
ಎಂಟೆತ್ತು ಹೊಡಕೊಂಡು ಕಂಟ್ಯಾಗ ಬರುವಾಗ |
ಗಂಟು ಬಿದ್ದಾಳ ಇದಿರಂಡಿ | ಹೊಟ್ಟೀಲಿ |
ಬಂಟ ಹುಟ್ಯಾನ ಬಸವಣ್ಣ || ||೭೪||
ಆ ಕಲ್ಲ ಈ ಕಲ್ಲ ಹಸರು ಹಳದಿಯ ಕಲ್ಲ |
ಹೆಸರಾದ ಕಲ್ಲ ಇಲಕಲ್ಲ | ಮುಂದಿರುವ |
ಮುತ್ತಿನ ಕಲ್ಲ ಮುದಗಲ್ಲ || ||೭೫||
ಒಗರಡಕಿ ಚಿಗರಡಕಿ ಚಿಕ್ಕಂದ್ಲೆ ಗೆಣೆತನ |
ಮತ್ತೆ ಮುದಗಲ್ಲ ಮಳಿಗ್ಯಾಗ | ಆಡಿದ ಮಾತು |
ಎಚ್ಚರಿಲ್ಲೇನ ಎದಿಯ್ಯಾಗ || ||೭೬||
ದೈವ ದೇವರ ಹಂತಿ ಭವದೊಳಗೆ ನಮ್ಹಂತಿ |
ತೇದುಂಡ ಹಂತಿ ನಂಬಾಳು | ಒಕ್ಕಲಿಗ |
ಕೋದದೆನಿ ಹಂತಿ ಜನುಮಾಕೋ ||೭೭||
ಬಸವಣ್ಣನ ಹೆಂಡತಿ ಹಸು ಮಗಳ ನೀಲವ್ವ |
ಬಸರಾದರ್ಯಾಗ ನಡದಾಳ | ಗೋದಿಯ |
ಪಸಿಹಂಗ, ನವಿಲು ಕುಣಿಧಂಗ || ||೭೮||
ಬಸವಣ್ಣನ ಹೆಂಡತಿ ಹಸುವುಗಳ ನೀಲವ್ವ |
ಕುಸುರದ ಸಿಂಬಿ ಬರಿಗೊಡ | ಹೊತುಗೊಂಡು |
ಉಸುರೆಂದು ಭಾವಿ ಇಳಿದಾಳ || ||೭೯||

ನಾಡಗೌಡನ ಮಗಳು ನಾಡೀಗೆ ದೊಡ್ಡರೆ ।
ನಾಗಳದ ಗೋಡಿ ಉಡಿಯಕ್ಕಿ । ಹಾಕಿಕೊಂಡು ।
ನಾಗಪ್ಪ ಗ್ಹಾಲು ಎರದಾಳ ॥ ||೬೦||
ಆರು ಸಾವಿರ ಗಂಟಿ ಮೂರು ಸಾವಿರ ಜಂಗು ।
ದೂರ ಕೇಳ್ಯಾವ ದುರ್ಗಕ್ಕ । ನಮ ಬಸವ ।
ಧೂಳ ಮುಚ್ಚ್ಯಾವೋ ಗಗನಕ್ಕ ॥ ||೬೧||
ಊರಿಗೆ ಹೋಗಬೇಕು ಜರ್ದರುಂಬಾಲಬೇಕು ।
ಮ್ಯಾಗ ಗುವರದ ಕೊಡಿಬೇಕು । ಮ್ಯಾಗಳ ।
ಸಂಗಪ್ಪ ಗ್ಹೋಗಿ ಬರಬೇಕು ॥ ||೬೨||
ಕಂಬಳಿ ಕರಿಯುವರ ಎಂಭತ್ತ ಜಡಿಯುವರ ।
ಕೆಂಭಾವಿ ಮಠದ ಶರಣೂರ । ಶಿವಯೋಗಿ ।
ರಮ್ಮಿಸಿ ಮಳೆಯ ಕರದಾರ ॥ ||೬೩||
ಎರಿಹೆಂಟೆ ಬರಿಗಾಲು ನಡುವೆ ನೆಗ್ಗಿಲಮುಳ್ಳು ।
ಗೆಣೆಯ ನಿನ್ನ ಕಳುವಿ ಬರುವಾಗ । ಕಣ್ಣೀರು ।
ತಡಪ ಉಳಿಹಾಂಗ ಸುರಿದಾವ ॥ ||೬೪||
ಸಣ್ಣಾನ ಕೆತ್ತೈತಿ ಬಣ್ಣಾನ ಕೊಟ್ಟೈತಿ ।
ಕಿನ್ನೂರಿ ಕಾಯಂತ ಕಿರಿನಗ । ಹೊತುಗೊಂಡು ।
ಬೋರ್ಯಾಡತಾನ ಬಸವಣ್ಣ ॥ ||೬೫||
ಮಠವೆಲ್ಲಿ ಮಠವೆಲ್ಲಿ ಮಠದ ಬಾಗಿಲವೆಲ್ಲಿ ।
ಕಚದ ರುದ್ರಾಕ್ಷಿ ಕಾನವೆಲ್ಲಿ । ಗ್ಯಾನಪ್ಪಯ್ಯ ।
ಮಠವೈತಿ ಬಾಳಿಯ ವನದಾಗ ॥ ||೬೬||
ಪುಂಡುಗಾರರ ಎತ್ತು ಹಿಂಡಿ ಎಮ್ಮಿದವ ।
ಗುಂಡದ ನೀರ ಕುಡದಾವ । ನಮ ಬಸವ ।
ಗಂಡರಳಿ ಬಣ್ಣ ತಿರಿಗ್ಯಾವ ॥ ||೬೭||
ಅಂದುಳ್ಳ ಮುದಗಲ್ಲು ಚಂದುಳ್ಳ ಬಾಜಾರ್ದಾಗ ।
ಗಂಧನಾರ್ಯಾವು ಗಗನಕ್ಕ । ಹುಸೇನಪುಚ್ಛ ।
ಗಂಗಮ್ಮ ಗ್ಯೋಗಿ ಬರತಾರ ॥ ||೬೮||




ಗಡಗಡನೆ ನಡಗುತ್ತ ಥಳಥಳನೆ ಮಿಂಚುತ್ತ ।
ಹಂಪಿಯಾಚೆ ಮಳಿಬಿತ್ತು । ರಾಶಿಯ ।
ಮೇಲೊಂದು ಮುತ್ತಿನ ಹನಿ ಬಿತ್ತು ॥೯॥
ಎರೀಯ ಹೊಲದಾಗ ಎಳಿಯ ಸವತಿಕಾಯಿ ।
ಹರಿಯಂದರ‍್ಯಾಂಗ ಹರಿಯಲಿ । ಆ ಬಲಿತ ।
ಮುರಿಯಂದ ರ‍್ಯಾಂಗ ಮುರಿಯsಲಿ॥ ॥೧೦॥
ಹೊತ್ತs ಮುಳಗಿದ ಕೂಡಲೆ ಹೊಲಕ ಬಂಡಿಯಕಟ್ಟಿ ।
ಹೊಲಗೇರಿ ಮುಂದ ನಗಮುಂದು। ಆ ಬಾಲಿ ।
ನೆಟ್ಟ್ಯಾನನ ಹುಡಗಿಯ ನಡ ಮುರದು ॥ ॥೧೧॥
ತುಂಬಿದ ಹೊಳಿಯಾಗ ಕೊಂಬೆರಡು ಕಾಣ್ತಾನ ।
ಬಂಗಾರ‍್ದ ಗಿಣಿಯ ಬಸವಣ್ಣ । ಬರುವಾಗ ।
ಮಂಗಳಾರುತಿ ಬೆಳಗ್ಯಾರೂ ॥ ॥೧೧॥
ಗುಡಗುಂಟಿ ದಾರ‍್ಯಾಗ ಸಾಲ ಟಿಂಗಿನಮರ।
ಕೊಂಗಿ ಕೊಂಗೀಗೆ ಎಳಿಬುರ । ನಮ ಬಸವ ।
ಬಿಲ್ಲಿ ಲೊಗೆದರ ಬಿಳಗಾಯಿ ॥ ॥೧೩॥
ಕೆಂದೆತ್ತ ಹಾಡಿಗೊಂಡು ಕಂದನ್ನಂದಿಟ್ಕೊಂಡು ।
ತಾಸೋತ್ತಿ ದಾರಿ ಯಮನೂರು । ಪೀರಾಗ ।
ಕೂಸೆತ್ತಿ ಕೈಯ ಮುಗಿದಾಳ ॥ ॥೧೪॥
ಹಕ್ಕರಕಿ ಹಸರಾಣಿ ಎಲ್ಲೈಲಿಗೊಳಗೊಳಕಿ ।
ಚಿಕ್ಕ ಯಮನೂರು ಕೇರಿಯಾಗ ।
ಎಚ್ಚರಿಕಿಲ್ಲೇನೋ ಎದಿಯಾಗ ॥ ॥೧೫॥
ಬಂಗಾರದ ಬಳಿಯವಳ ಬಂದಿ ಕುಪ್ಪಸದವಳ ।
ಬಂದಾಳೇಳಣ್ಣಾ ಜಾತ್ರೀಗೆ ।
ತಂದಾಳೇಳಣ್ಣಾ ಕರಿಗಡಬು ॥ ॥೧೬॥
ಗೆಣಿಯಾ ಬರಲಾನಂತ ಗೆಣಸಿನ್ಹೋಳಿಗಿ ಮಾಡಿ ।
ಹರದಾರಿ ಗೆಣಿಯ ಬರಲಿಲ್ಲ ।
ಮಳಿಯೊಳಗ ತಿಂದೋಡಿಹಂಡ ತಿನವಳ ॥ ॥೧೭॥

ಕುಂಟೇಚಿ ಬಸವಗೆ ಕುಂಟಿ ಅನ್ನವರ್‍ಯಾರ ।
ಹಾಪಾಡಿ ಕಾಲ ಮುರಕೊಂಡ । ನಮ್ಮ ಬಸವ ।
ಮಂಟಪದೊಳಗ ಮಲಗ್ಯಾನ ॥ ॥೯೭॥

ಶರಣಯ್ಯ ನಮ್ಮ ದೇವರಿಗ್ಯೈದು ।
ಶರಣ್ಹೇಳೋ ಗುರುವಿಗ್ಯೈದು । ಊಟ ಹಂತಿಯರಿಗ್ಯೈದು ।
ಶಾಂಣೇಶಾ ॥ ॥೯೮॥

ಶರಣ ಸಾಲಾವಾಲಿ ನಮ್ಮದಲ್ಲೋ ।
ಕರಣ ಭಾವ ನಿಂದೆನೋ ।
ಕರಣಭಾವ ನಿಮ್ಮದಾದರೆ ಕೈಲಾಸ ಬಂದಿಳಿದಾವ ॥ ॥೯೯॥

ಡೊಳ್ಳಿನ ಮ್ಯಾಗಾಳೋ ದಿಮ್ಮ ಗುರವೇ ।
ನಾಲಿಗ್ಯಾ ಪ್ಯಾಗಳೋ ಸುಳ್ಳೀನೋ ।
ಸೊಳ್ಳಿತ್ತಿ । ॥೧೦೦॥

ಶಿವ ನಿನ್ನ ಭಜನಿ ಮಾಡೇನು ।
ಆಕೇನಪ್ಪಾ ನಿನ್ನಂಗಳದಾಗೆ ।
ಓದೇನಪ್ಪ ನಿನ್ನ ಸಾಲ್ಯಾಗ ।
ಏಸೂರು ಮುಕದಲ್ಲಿ ಹಾಡಿದರಪ್ಪ ।
ಶಾಸ್ತ್ರಮುಕ ಶಿವ ಒಬ್ಬ ।
ಕಾವೀಯ ಉಟ್ಟ್ಯಾನ ಕಾವೀಯ ಹೊದ್ದ್ಯಾನ ।
ಮಾವೀನ ಗಿಡಕ ಮಲಗ್ಯಾನು । ಕ್ಷನ ಮರದ ನ್ಯಾಲಿ ।
ಮಾಯುವಾಗ್ಯಾರ ಮತ್ಯಾಕ ॥ ॥೧೦೧॥

ಜಂಗಮುಽಕಬ್ಬುಡುಗರನಾ ಹೆಂಗ ಸಲುಹಲಿ ಶಿವನೆ ।
ಜಂಗ ಬೇಕವನ ಕಾಲೀಗೆ । ದುಡ್ಡೀನ ।
ಲಿಂಗಬೇಕು ಕೊರಳೀಗೆ ॥ ॥೧೦೨॥

ಕುರುಬರ ಹುಡುಗಿ ತುರುಬ್ಯಾಕ ನಿಗರ್‍ಯಾವ ।
ತುರಬಿನ್ಯಾಗೆರಡ ತಿರಿಅರಿಬಿ । ಎಲಿಕೊಂಡು ।
ಬೆರಗ ಮಾಡ್ಯಾಳ ಬೆಳಕವನಾಣ ॥ ॥೧೦೩॥

ಎರ್ರಿ ನೋಡುನು ಬಾರ ಹಿರಿರಿವಾಗಿ ಬಸವನನ
ಗ್ವಾಡಿಲಿಯ ವಡದು ಬರತಾನ । ಬಸವಯ್ಯ ।
ಇಣಿಯ ವ್ಯಾಲ್ಯೆತಿ ಕೈಲಾಸ ॥ ||೧೦೪||
ಹೊಕ್ಕಿ ನೋಡುನ ಬಾಳ ಚೆಕ್ಕಾಗಿ ಬಸವಗ ।
ಒಕ್ಕಳಗೆಜ್ಜಿ ಹುರಿಗೆಜ್ಜಿ । ಸಾಂಬಸ್ವ ।
ಸುತ್ತ ಮರ್ತೇಕ ಬಲು ಚೆಲುವ ॥ ||೧೦೫||
ಕರಿಯ ಕೋಡಿನ ಬಸವ ಕೆರ್ಯಾಗ ಗ್ಯಾಂಗಿದ್ದಿ ।
ಕೆಂಬತ್ತಿ ಕೆರಿಯ ಮಳಮೊತ್ತಿ । ಬಸವನ ।
ಕರದ ಬಾಡ್ಯಾವ ಬಿಸಲೀಗಿ ॥ ||೧೦೬||
ಗಂಡನ ಹಿತವೇನ ಕೆಂಡದ ತಂಪೇನ।
ಕೊಂಡ ಮಜ್ಜಿಗಿ ರುಚಿಏನ । ಎಲಿಗೆಣೆಯ ।
ಭಂಡಾಗಿ ಬದುಕಿ ಫಲವೇನ ॥ ||೧೦೭||
ಹಾಡೀಗಿ ಹಾಡಿಲ್ಲ ಏಡೀಗಿ ತಿಲಿಯಿಲ್ಲ ।
ಮೋಡ ಬಂದಲ್ಲಿ ಬಿಸಿಲಿಲ್ಲ । ಹೆಣ್ಣಿಗೆ ।
ಓಡಿಹ್ವಾದಲ್ಲಿ ಸುಖವಿಲ್ಲ ॥ ||೧೦೮||
ಗಂಡು ಹೊಡಿಯಲಿ ಭೂಮಿ ಹೆಣ್ಣು ಹೂಡಲಿ ಒಲಿಯ
ಬಣ್ಣ ತೊಟ್ಟೇಲು ತೂಗಲಿ । ಶಿವರಾಯ ।
ಗಿಣ್ಣ ನಿನಗೆಡಿಯೋ ಕೈ ಮುಗಿದು ॥ ||೧೦೯||
ಹೋಳಿಯಾಡದ ನಾಡು ನಾಳಿನದೆ ಕಾಡುತೋ ।
ಗೋಳಾತೋ ಜನಕ ಮೂಲಾತೊ ।ಮಳಿ ಹೋಗಿ।
ಹಾಳಾತೊ ಪಿಡಗೆದ್ದು ದಿನದಿನಕ ॥ ||೧೧೦||
ಎರಿಯ ಹೊಲದಾನ ಬಂಡಿ ಮಸಮನದು ಬರುವಾಗ ।
ಹೊಲಗೇರಿ ಮುಂದ ನಗ ಮುರಿದ । ಈ ಊರ ।
ಹಾರ್ದೋರ ಹುಡ್ಗಿ ನಡ ಮುರಿದ ॥ ||೧೧೧||
ಈ ಊರ ಸುತ್ತ ಮುತ್ತ ಪಟ್ಟಟ್ಟಿ ಗಿಡಹುಟ್ಟಿ ।
ಪಡ್ಡರ ಹುಡುಗಿ ಗೆಳತನ । ಮಾಡಿದರ ।
ಗೊಡ್ಡೆಮ್ಮಿ ಹಾಲು ಉಣಿಸ್ಯಾಳೋ॥ ||೧೧೨||

## ಹಂತಿಯ ಪದಗಳು

ಬಂಡಿ ಹೊಡೆಯುವಾಗ ಬಾರಿಕೋಲ ಬಿದ್ದೋತು ।
ಕಂಡಾಗ ನನಗ ಕೊಡಿರಣ್ಣಾ ।
ಕಂಡಾಗ ನನಗ ಕೊಡಿರಣ್ಣಾ-ಬಿಡಿರಣ್ಣಾ ।
ನನ ಚಂದುಳ್ಳಿ ಮೋರೆ ನೆನಕೋಳ್ರಿ ॥೧೧೩॥

ಬಸವ ಬಂಡಿಯನೇರಿ ಶಿವನು ನಂದಿಯನೇರಿ ।
ಪಾರ್ವತಾದೇವಿ ರಥವೇರಿ ।
ಪಾರ್ವತಾದೇವಿ ರಥವೇರಿ । ಬರುವಾಗ ।
ಬಂದಂಥಾ ಮಾಡ ಬಯಲಾತೋ ॥೧೧೪॥

ಕೋಡನು ತಿರವುತ ಬಾಲನು ಬೀಸುತ ।
ಬಸವ ಬಂದಾನೋ ಬಣವಿಗೆ ।
ಬಸವ ಬಂದಾನೋ ಬಣವಿಗೆ । ಮೆಟ್ಟಿ ಮೆಟ್ಟಿ ।
ಮೆಯ್ಯಾಕ ನೀನ್ಯಾರ ಮಗನೋ ಚನ್ನ ಬಸವಾ ॥೧೧೫॥

ಬೆಳ್ಳನ್ನ ಎರಡೆತ್ತು ಬೆಳ್ಳಿಯ ಬಾರಕೋಲು ।
ಬಂಗಾರದ ಶೆಡ್ಡಿ ಬಲಗೈಯೋ ।
ಬಂಗಾರದ ಶೆಡ್ಡಿ ಬಲಗೈಯಾಗ । ಹಿಡಿಕೊಂಡು ।
ಹೊನ್ನ ಬಿತ್ಯಾರೋ ಹೊಳಿಸಾಲ ॥೧೧೬॥

ಬೂದಗ ಬಾಸಿಂಗ ಭೂಮಿತಾಯಿಗೆ ದಂಡಿ ।
ಸಾಲಪಾಂಡವರಿಗೆ ಸಲವವ್ವಾ ।
ಸಾಲಪಾಂಡವರಿಗೆ ಸಲವವುತ ದೀವ್ಯ ।
ಪಡೆದಾರೋ ಮಾನೇವಾ ॥೧೧೭॥

ಎಂಟೆತ್ತು ಹೊಡಿಕೊಂಡು ಕಂಟ್ಯಾಗ ಬರುವಾಗ ।
ಗಂಟಬಿದ್ದಾಳೋ ಇದಿ ಮಾಯೀ ।
ಗಂಟಬಿದ್ದಾಳೋ ಇದಿಮಾಯೀ ಹೊಟ್ಟೀಲಿ ।
ಬಂಟ ಹುಟ್ಯಾನೋ ಬಸವಣ್ಣ ॥೧೧೮॥

ಆರುಸಾವಿರ ಜಂಗಮ ಮೂರುಸಾವಿರ ಗಂಟಿ ।
ದೂರಕೇಳ್ಯಾವೋ ಗಗನಕ್ಕ ।

ದೂರಕೇಳ್ಯಾವೋ ಗಗನಕ್ಕನವು ಬಸವ |
ಧೂಳ ಎಬ್ಬಿಸ್ಯಾನೋ ಶಿವನೀಗೆ ||೧೧೯||
ಬೆಳ್ಳೆನ್ನ ಎರಡೆತ್ತು ಬೆಳ್ಳಿಯ ಬಾರಕೋಲು |
ಭಂಗಾರಸೆಡ್ಡಿ ಬಲಗೈಯೊ |
ಭಂಗಾರಸೆಡ್ಡಿ ಬಲಗೈಯಾಗ ಹಿಡಕೊಂಡು |
ಹೊನ್ನ ಬಿತ್ತ್ಯಾರೊ ಹೊಳಿಸಾಲ ||೧೨೦||
ಮೂಡಲ ದಿಕ್ಕಿಗೆ ಮೂಡ್ಯಾವ ಎರಡೆತ್ತು |
ಕಾಡ್ಯಾವೊ ಎರಡಕೊನಿ ಹೋರ್ಯೋ |
ಕಾಕ್ಯಾವೊ ಎರಡಕೊನಿ ಹೋರ್ಯೋ | ನವು ಬಸವ |
ಬೇಡ್ಯಾವೋ ಎರಡ ಕೊಂಬಣಸೋ ||೧೨೧||
ಹತ್ತಿ ಹೂವಿನ ಸೀರಿ ತೆಕ್ಕೆತುಂಬ ನೀರಿಗಿ |
ಬಿಚ್ಚಿ ಹರಿವ್ಯಾಳೋ ಭೂವ್ಯಾಗ |
ಬಿಚ್ಚಿ ಹರಿವ್ಯಾಳೋ ಭೂವ್ಯಾಗ | ನನತಾಯಿ |
ಹುತ್ತಲೇರ್ಯಾಳೋ ಮೇಟಾಗ್ಯ| ||೧೨೨||
ಕಸವ ಹೊಡೆದಾ ಕೈ ಕಸ್ತೂರಿ ನಾತವ |
ಬಸವಣ್ಣಾ ನಿನ್ನ ಶಗಣೀಯ |
ಬಸವಣ್ಣಾ ನಿನ್ನ ಶಗಣೀಯ | ಬಳದ ಕೈ |
ಯಸಳ ಯಾಲಕ್ಕಿ ಗೊನಿನಾತ ||೧೨೩||
ಆಕಾಶ ಹರಗೋಲು ಮುಗಿಲು ಮುಟ್ಟಿದ ಕುಂಟಿ |
ಹರಗುವ ಎರಡೆತ್ತು ನವರತ್ನ |
ಹರಗುವ ಎರಡ ನವರತ್ನ | ಕಟಿಗೊಂಡು |
ಬಸವ ಜಗಕನ್ನ ನೀಡ್ಯಾನು ||೧೨೪||
ತುಂಬಿದ ಹೊಳೆಯಾಗ ಕೊಂಬ ಕಾಣಿಸತಾವ |
ಬಂಗಾರದ ದಿಣಿಯ ಬಸವಣ್ಣ |
ಬಂಗಾರದ ದಿಣಿಯ ಬಸವಣ್ಣ | ಬರುವಾಗ |
ರಂಭ್ಯಾರು ಆರುತಿ ಬೆಳಗ್ಯಾರ ||೧೨೫||

ಕುದರೆಗೆ ಕೋಡಿಲ್ಲಾ ಕೋಣಂಗೆ ಡುರ್ಕಿಲ್ಲಾ |
ಓ. ಸಿ. ಆಡುವಗ ಬುದ್ಧಿಲ್ಲೊ |
ಓ. ಸಿ. ಆಡುವಗ ಬುದ್ಧಿಲ್ಲೋ | ಕಣದಾಗ |
ರೂಲ ಹೊಡಿದರ ನಿದ್ದಿಲ್ಲೊ ||೧೭||
ಎಳ್ಳಮ್ಮಸಿನ ತೇರು ಕಲ್ಲಾಗ ಎಳೆದೇವು |
ಶಿರಹಟ್ಟಿ ಯಾಗಿರುವ ಶಿವಯೋಗಿ |
ಶಿರಹಟ್ಟಿ ಯಾಗಿರುವ ಶಿವಯೋಗಿ | ನಿನ್ನ ತೇರು |
ಎರೆಯ ಹೊಲದಾಗ ಎಳದೇವೋ ||೧೮||
ಜೋಳದಂತಿಯ ಕಟ್ಟಿ ಸಾಳಿಗೆಂಟು ಬಿಸವಾತೋ
ಆನಿ ತುಳಿದರ ಸವಿದಿಲ್ಲೋ
ಆನಿ ತುಳಿದರ ಸವಿದಿಲ್ಲೋ ನಮ್ಮ ಬಸವ
ಪಾದ ಇಟ್ಟಲ್ಲಿ ಸವೆದಾವೋ
ಹಾದೀಯ ಮನೆಯವಳೆ ಗೋದಿಯ ನೆರೆಯುವಳೆ
ನನ ನೋಡಿ ಮಾರಿತಿರುವವಳೇ |
ನನ ನೋಡಿ ಮಾರಿತಿರುವವಳೇ | ನನ್ನ ಗೆಣತಿ |
ನಾನು ಮಾಡಿದ ತಪ್ಪೇನೆ ||೧೯||
ಹಳ್ಳಕ ಹೋದಾಗ ಹೊಳ್ಳೊಳ್ಳಿ ನೋಡುವ |
ಮೆಳ್ಳಗಂಣಿನ ಎಲೆ ಹೆಣ್ಣೆ |
ಮೆಳ್ಳ ಗಂಣಿನ ಎಲೆ ಹೆಂಣೆ | ನಿನಗಾಗಿ |
ಒಳ್ಳೊಳ್ಳೆ ವಸ್ತ್ರ ತಂದೀನಿ ||೨೦||
ಬಂಡಿಕಾರಣ್ಣನ ಬಂಡಾಟ ನೋಡಿರಿ |
ಬಾರುಕೋಲವನ ಬಲಗೈಗಿ |
ಬಾರುಕೋಲವನ ಬಲಗೈಲಿ | ಹಿಡಕೊಂಡು |
ಬೋರ‍್ಯಾಡಿ ಬಂಡಿ ಹೊಡದಾನ ||೨೧||
ಹಾದಿಯ ಹೊಲಪಾಗ ಹಾರವರ ಅಟ್ಟಕಣೆ |
ಕಂಚಿನ ಕವಣೆ ಮಿಡಿಬಿಲ್ಲು |
ಕಂಚಿನ ಕವಣೆ ಮಿಡಿಬಿಲ್ಲು | ತಕ್ಕೊಂಡು |
ಲಂಕಿಗ್ಹಿ ಘಾಸ್ಯಾನ ಗಿಳಿಹಿಂಡು ||೨೨||

ಶಿವ ಶಿವ ಎಂದರ ಸಿಡಿಲೆಲ್ಲ ಬಯಲಾಗಿ ।
ಕಲ್ಲು ಬಂದೆರಗಿ ಕಡೆಗಾಗಿ ।
ಕಲ್ಲು ಬಂದೆರಗಿ ಕಡೆಗಾಗಿ । ಎಲೆ ಮನವೆ ।
ಶಿವನೆಂಬ ಶಬುದ ಬಿಡಬ್ಯಾಡ ||೧೩೩||
ಚಂದುಳ್ಳ ಪಟ್ಟದಕಲ್ಲು ಇಂಬುಳ್ಳ ಗುಡಿಯಾಗ ।
ಮಂದಾನ ಬಸವ ಮಲಗ್ಯಾನ ।
ಮಂದಾನ ಬಸವ ಮಲಗ್ಯಾನ । ಗುಡಿಮುಂದ ।
ಕಂದsನ ಬೇಡುವರು ಕಡೆಯೆಲ್ಲ ||೧೩೪||
ಹಳ್ಳsದ ಹೊಲದಾಗ ಬೆಳ್ಳsನ ಬಿಳಿಜೋಳ ।
ಮೆಲ್ಲsಕ ಮೆಲಿಯೋಗಿಣಿರಾಮು ।
ಮೆಲ್ಲsಕ ಮೆಲಿಯೋಗಿಣಿರಾಮಾ । ನನ್ನಣ್ಣ ।
ಕಲ್ಲಿ ಬಂದಾವು ಕಡಿಗಾಗೋ ||೧೩೫||
ಕೆಂಪು ಮಾರಿಯ ದಂಡು ಗುಂಪಾಗಿ ಮುತ್ಯಾರೋ
ಕಂಪಿಸಿ ಹೋತೋ ನರಗುಂದ ।
ಕಂಪಿಸಿ ಹೋತೋ ನರಗುಂದ । ಬಾಬಾಸಾಬ ।
ಹಂಪಿ ಹೊಳಿ ಮುಂದ ತಡವ್ಯಾನ ||೧೩೬||
ಹಂಡ ಬಂಡದ ಕುದುರಿ ಗೊಂಡೇದಲಗಾಮು ।
ದಂಡು ಇಳಿದೀತೋ ನರಗುಂದ್ಕ ।
ದಂಡು ಇಳಿದೀತೋ ನರಗುಂದ್ಕ । ಬಾಬಾಸಾಬ ।
ಗುಂಡಿಲಿಕ್ಯಾನ ಗುಡಿಯಾಗ ||೧೩೭||
ರಾಗಿ ಬಣ್ಣದ ಕುದುರಿ ರಾಜ್ಯೇಕ ದೊಡ್ಡದು ।
ರಾಜದೊಳು ರಾಜ ಮಳೆರಾಜ ।
ರಾಜದೊಳು ರಾಜ ಮಳೆರಾಜ । ಬರುವಾಗ ।
ರಾಜೀವ ಕೈಯ ಮುಗಿದಾವ ||೧೩೮||
ಭೂದನಿಗೆ ಬಾಸಿಂಗ ಭೂಮಿ ತಾಯಿಗೆ ದಂಡೆ ।
ಸಾಲ ಶರಣರಿಗೆ ಸರಮಾಲೆ ।
ಸಾಲ ಶರಣರಿಗೆ ಸರಮಾಲೆ । ಕಟಗೊಂಡು ।
ಮಾಪಯ್ಯ ಗೆದ್ದ ಕೈಲಾಸ ||೧೩೯||

ಹಣ್ಣು ಹಾಗಲಕಾಯಿ ಎಣ್ಣ್ಯಾಗ ಕರದೀನ ।
ಉಂಡರs ನೋಡೋ ರುಚಿಗಾರ ।
ಉಂಡರs ನೋಡೋ ರುಚಿಗಾರ ।ನನವ್ವ್ಯಾಲ।
ತಂದರs ನೋಡೋ ಸವತೀನ ||೧೪೦||
ಇದ್ದೂರ ಬೀಗತನ । ಬಿದ್ದ ಗ್ವಾಡೀಸಮಾನ ।
ಇದ್ದೂರಾಗ ಮಗಳ ಕೊಡಬೇಡ ಹಡದವ್ವ
ಇದ್ದಲ್ಲಿಗೆ ಮಾತ ಬರತಾವ ||೧೪೧||
ನಾದೀನಿ ನೀ ಬಾರ । ನಿಂಗವ್ವ ನೀ ಬಾರ ।
ನಾ ತಂದ ಮಡಿ ನೀ ಉಡಬಾರ ।
ನಾ ತಂದ ಮಡಿ ನೀ ಉಡಬಾರ ಮದುವ್ಯಾಗ
ಆನಂದದಿಂದ ಹರಕೆ ಕೊಡಬಾರ ||೧೪೨
ಹಸಿ ನೋಡಿಹರಗಣ್ಣ । ತತಿ ನೋಡಿ ಬಿತ್ತಣ್ಣ
ಗರಿ ನೋಡಿ ಕಬ್ಬ ಮುರಿಯಣ್ಣ
ಗರಿ ನೋಡಿ ಕಬ್ಬ ಮುರಿಯಣ್ಣ ಹೆಣ್ಣೀನ
ನೆಲೆ ನೋಡಿ ಸೆರಗ ಹಿಡಿಯಣ್ಣ ||೧೪೩||
ಎಳ್ಳು ಬಿತ್ತಲಿಲ್ಲ । ಎಳ್ಳು ಬೆಳೆಯಲಿಲ್ಲ ।
ಎಳ್ಹೂವಿನ ಸೀರಿ ಉಡಲಿಲ್ಲ ।
ಎಳ್ಹೂವಿನ ಸೀರಿ ಉಡಲಿಲ್ಲ । ಹಡದವ್ವ ।
ಒಳ್ಳೆಯವರ ಮನೆಗೆ ಕೊಡಲಿಲ್ಲ ||೧೪೪||
ನಕ್ಕರ ನಗಲೆವ್ವ । ನಗೆ ಮುಖದ ಕ್ಯಾದಿಗಿ
ನಾ ಮೆಚ್ಚಿ ಮುಡಿದ ಪರಿಮಳವ ।
ನಾ ಮೆಚ್ಚಿ ಮುಡಿದ ಪರಿಮಳದಾಹೂವ।
ಅವಳೊಂದು ಘಳಿಗೆ ಮುಡಿಯಲಿ ||೧೪೫||

# ಸಮಾಪ್ತ

# ಶೀಘ್ರದಲ್ಲಿಯೇ ಪ್ರಕಟವಾಗಲಿರುವ ನಮ್ಮ ಹೊಸಹೊತ್ತಿಗೆಗಳು

ಶ್ರೀ ಎಲ್. ಆರ್. ಕುಲಕರ್ಣಿ, ಸಾಲಗುಂದ
ಆವರಿಂದ ವಿರಚಿತ.

ಸೇಡಿನ ಪರಿಣಾಮು ( ಕಾದಂಬರಿ)
೨ ಎರಡು ಮದುವೆಗಳು ,,
೩ ಯಾರು ಕಾರಣ? (ಪತ್ತೇದಾರಿ ಕಾದಂಬರಿ)
ಬಂಧುಗಳಿಗಾಗಿ ಬಲಿದಾನ ಅಥವಾ ಕೃಷ್ಣನ ಸುಳಿಗೆ? (ಪೌರಾಣಿಕ ನಾಟಕ)
೪ ಶನಿಯ ಸೋಲು (ಪೌರಾಣಿಕ ಕಥೆ)
೫ ವೇಶ್ಯೆ ಕರೆದಾಗ? (ಸಾಮಾಜಿಕ ಕಥೆ)
೬ "ಕೋಮಾ" (ಸಾಮಾಜಿಕ ನಾಟಕ)

ಈ ವರೆಗೂ ನಿಮಗೆ ಬುಕ್ ಸ್ಟಾಲ್‌ಗಳಲ್ಲಿ ಸಿಗದಷ್ಟು ನವೀನ ವಿಚಾರಗಳು, ಸತ್ಯ-ನಿಷ್ಠುರತೆಯು, ಹೇರಳ ಸಾಹಿತ್ಯವು ಒದಗಿಸುತ್ತವೆ. ಮೇಲ್ಕಾಣಿಸಿದ ಯಾವದೇ ಪುಸ್ತಕವನ್ನು ನೀವು ಓದಲು ಕುಳಿತರೆ ಕೊನೆಯವರೆಗೂ ರೋಮಾಂಚಿತರಾಗಿ ಮುಂದೇನು? ಮುಂದೇನು? ಎನ್ನುತ್ತಲೇ ಪೂರ್ಣಗೊಳಿಸುವಿರಿ.

ಪ್ರಕಾಶಕರು,
ಜೆ. ಟಿ. ಬಾಕಳೆ,
ಶ್ರೀ ಜಗದಂಬಾ ಪ್ರಕಾಶನ, ೧೪೪೭೩, ಹುಬ್ಬಳ್ಳಿ

# ನಮ್ಮ ಪ್ರಕಟಣೆಗಳು

[ಕಾಮಶಾಸ್ತ್ರದ ಪುಸ್ತಕಗಳು]

೧ ಸಂಸಾರ ಸುಖ
೨ ಮೊದಲ ರಾತ್ರಿ
೩ ಅನೈಸರ್ಗಿಕ ರತಿಕ್ರೀಡೆ
೪ ರತಿ ಕಲೆ
೫ ಸಂಭೋಗಾಸನಗಳು
೬ ದಾಂಪತ್ಯ ವಿಲಾಸ
೭ ರತಿಶಾಸ್ತ್ರ
೮ ದಾಂಪತ್ಯ ಸುಖ
೯ ಲೈಂಗಿಕ ರೋಗಗಳು
೧೦ ಪ್ರೇಮ ವಿಲಾಸ

## ಧಾರ್ಮಿಕ ಪುಸ್ತಕಗಳು

೧ ವೀರಭದ್ರದೇವರ ವಡಬುಗಳು
೨ ಶ್ರೀ ಸಿದ್ಧರಾಮೇಶ್ವರ ಚರಿತ್ರೆ
೩ ಶ್ರೀ ಬನಶಂಕರೀ ಚರಿತ್ರೆ
೪ ಸರ್ವಜ್ಞ ವಚನಗಳು
೫ ಅಕ್ಕಮಹಾದೇವಿ ವಚನಗಳು
೬ ಅಖಂಡೇಶ್ವರ ವಚನಗಳು
೭ ಹಳ್ಳಿಯ ಹಾಡುಗಳು
೮ ಗರತಿಯ ಹಾಡುಗಳು
೯ ಹಂತಿಯ ಹಾಡುಗಳು
೧೦ ದೇವಪೂಜಾ ಪದ್ಧತಿ
೧೧ ದಂಪತಿಯ ಒಗಟುಗಳು
೧೨ ಹದಿನಾರು ಸೋಮವಾರ ವ್ರತಕಥೆ
೧೩ ಶನಿಮಹಾತ್ಮೆ
೧೪ ಶ್ರೀ ಬಸವೇಶ್ವರ ವಚನಗಳು
೧೫ ಶಿವಪೂಜಾ ವಿಧಿ
೧೬ ಒಗಟಿನ ಮಾಲೆ
೧೭ ಅಂಕಲಿಪಿ

## [ ನಾಟಕಗಳು ]

೧ ವರದಕ್ಷಿಣೆ
೨ ಸತ್ಯಪರೀಕ್ಷೆ

## —: ಕಾದಂಬರಿಗಳು :—

೧ ಪಾತಾಳ ಗೃಹ
೨ ದುರ್ಭೋಗ
೩ ಉಲ್ಕಿಗಂಗಾ (ಅಚ್ಚಿನಲ್ಲಿ)
೪ "ಮಿಸ್ ಪದ್ಮಾ"

ಪ್ರಕಾಶಕರು:-
**ಜೆ. ಟಿ. ಬಾಕಳೆ**
ಶ್ರೀ ಜಗದಂಬಾ ಪ್ರಕಾಶನ, ೧೪೪೭೩, ಹುಬ್ಬಳ್ಳಿ.